ಎನ್. ನೋಸೋವ್

# ಅಜ್ಜನ ಮನೆಗೆ ಹೋದಾಗ



# ನಿಕೊಲಾಯ್ ನೋಸೊವ್

# ಅಜ್ಜನ ಮನೆಗೆ ಹೋದಾಗ













ಚಿತ್ರಗಳು: ಐ. ಸಿಮ್ಯೋನೊವ್

ಅನುವಾದ: ಗೋಪಾಲಕೃಷ್ಣರಾವ್



ಪ್ರಗತಿ ಪ್ರಕಾಶನ
ಮಾಸ್ಕೋ



ಬೇಸಿಗೆ ರಜ ಬಂತು. ನಾವು, ಅಂದರೆ ನಾನು ಮತ್ತು ಷೂರಿಕ್, ಹಳ್ಳಿಯಲ್ಲಿದ್ದ ನಮ್ಮ ಅಜ್ಜನ ಮನೆಗೆ ಹೋದೆವು. ಷೂರಿಕ್ ನನ್ನ ತಮ್ಮ. ಅವನಿನ್ನೂ ಶಾಲೆಗೆ ಹೋಗುತ್ತಿಲ್ಲ. ನಾನಾಗಲೇ ಒಂದನೇ ತರಗತಿ. ಆದರೂ ಅವನು ನನ್ನ ಮಾತನ್ನೇ ಕೇಳುವುದಿಲ್ಲ. ಪರವಾಗಿಲ್ಲ, ಕೇಳದೇ ಇದ್ದರೆ ಅಷ್ಟೇ ಹೋಯಿತು! ಅಜ್ಜನ ಮನೆಗೆ ಹೋದ ದಿನವೇ ನಾವು ಅಂಗಳ, ಷೆಡ್ಡು, ಅಟ್ಟ, ಎಲ್ಲ ಕಡೆಯೂ ಏನೇನಿದೆ ಅಂತ ಹುಡುಕಿದೆವು. ನನಗೆ ಒಂದು ಖಾಲಿ ಗಾಜಿನ ಜಾಡಿ, ಒಂದು ಖಾಲಿ ಬೂಟ್ ಪಾಲಿಷ್ ಡಬ್ಬಿ ಸಿಕ್ಕಿದವು. ಷೂರಿಕ್‌ನಿಗೆ ಒಂದು ಹಳೆ ಬಾಗಿಲ ಹಿಡಿ, ಬಲ ಕಾಲಿಗೆ ಹಾಕಿಕೊಳ್ಳುವ ಒಂದು ದೊಡ್ಡ ರಬ್ಬರ್ ಬೂಟು ಸಿಕ್ಕಿದವು. ಆಮೇಲೆ ಅಟ್ಟದಲ್ಲಿ ಒಂದು ಮೀನು ಹಿಡಿಯೋ ಕೋಲಿತ್ತು. ನಾನೇ ಅದನ್ನು ಮೊದಲು ನೋಡಿದ್ದು.

"ಅದು ನನ್ನದು!" ಅಂತ ಕೂಗಿ ಹೇಳಿದೆ.

ಷೂರಿಕ್‌ನೂ ಅದನ್ನು ಕಂಡ.

"ಅದು ನನ್ನದು! ಅದು ನನ್ನದು!" ಅಂತ ಅವನೂ ಕೂಗಿ ಹೇಳಿದ.

ನಾನು ಕೋಲಿನ ಒಂದು ತುದಿ ಹಿಡಿದುಕೊಂಡು ಎಳೆದೆ. ಅವನು ಇನ್ನೊಂದು ತುದಿ ಹಿಡಿದುಕೊಂಡು ಎಳೆದ. ನನಗೆ ಕೋಪ ಬಂತು. ಒಂದು ಸಾರಿ ಜೋರಾಗಿ ಜಗ್ಗಿ ಎಳೆದು ಬಿಟ್ಟುಬಿಟ್ಟೆ. ಅವನು ಹಿಂದಕ್ಕೆ ಬಿದ್ದುಬಿಟ್ಟ. ಆಮೇಲೆ ಹೇಳುತ್ತಾನೆ:

"ನಿನ್ನ ಹಳೇ ಕೋಲು ನನಗೆ ಬೇಕು ಅಂತ ಅಂದುಕೊಂಡ್ಯಾ ! ತಗೊಂಡು ಹೋಗು. ನನ್ನ ಬಳಿ ರಬ್ಬರ್ ಬೂಟು ಇದೆ."

"ಇಟ್ಟುಕೊಂಡು ಮುದ್ದಾಡು. ನನ್ನ ಕೋಲು ತಂಟೇಗೆ ಮಾತ್ರ ಮತ್ತೆ ಬರಬೇಡ."

ನಾನು ಷೆಡ್ಡಿನಲ್ಲಿ ಒಂದು ಸನಿಕೆ ಕಂಡೆ. ಅದನ್ನು ತಗೊಂಡು ಅಂಗಳದಲ್ಲಿ ಅಗೆದು ಹುಳು ಗಳನ್ನು ತೆಗೆಯೋಕೆ ಹೊರಟೆ. ಮೀನು ಹಿಡಿಯೋದು ನನ್ನ ಉದ್ದೇಶವಾಗಿತ್ತು. ಷೂರಿಕ್ ಅಜ್ಜಿಯ ಹತ್ತಿರ ಹೋಗಿ ಬೆಂಕಿ ಕಡ್ಡಿ ಕೇಳಿದ.

"ಬೆಂಕಿಕಡ್ಡಿ ಯಾಕೋ ನಿನಗೆ?" ಅಜ್ಜಿ ಕೇಳಿದಳು.

"ಅಂಗಳದಲ್ಲಿ ಒಂದು ಚೂರು ಬೆಂಕಿ ಹೊತ್ತಿಸಬೇಕು, ಅಜ್ಜಿ. ಬೆಂಕಿಯ ಮೇಲೆ ಈ ಬೂಟು ಇಡ್ತೇನೆ. ಅದು ಕರಗಿ ರಬ್ಬರ್ ಆಗುತ್ತೆ."

"ಇನ್ನೇನು ಮಾಡಬೇಕೂಂತ ಅಂದುಕೊಂಡಿದ್ದೀಯ? ನಿನ್ನ ಮೇಲೆ ಕಣ್ಣಿಡದೆ ಇದ್ದರೆ ಇಡೀ ಮನೇನೆ ಸುಟ್ಟು ಹಾಕಿ ಬಿಡ್ತೀಯಷ್ಟೆ. ಬೇಡಪ್ಪ, ಬೆಂಕಿ ಕಡ್ಡಿ ಮಾತ್ರ ಕೇಳಬೇಡ. ಮಕ್ಕಳು ಯಾವತ್ತೂ ಬೆಂಕಿ ಜೊತೆಗೆ ಆಟವಾಡಬಾರದು. ಅದರಿಂದ ಎಷ್ಟು ಅಪಾಯ ಗೊತ್ತೆ?"

ಷೂರಿಕ್ ಆ ಯೋಚನೆ ಬಿಟ್ಟ. ಒಂದು ದಾರ ತಗೊಂಡು ಒಂದು ತುದಿಗೆ ಬಾಗಿಲ ಹಿಡಿಯನ್ನೂ ಇನ್ನೊಂದು ತುದಿಗೆ ಬೂಟನ್ನೂ ಕಟ್ಟಿದ. ಅದನ್ನು ಎಳೆದುಕೊಂಡು ಅಂಗಳ



ದಲ್ಲೆಲ್ಲ ಓಡಾಡಿದ. ಅವನೆಲ್ಲಿಗೆ ಹೋದರೆ ಬೂಟೂ ಅಲ್ಲಿಗೇ. ನನ್ನ ಬಳಿ ಬಂದು ಹುಳು ಅಗೆಯುತ್ತಿದ್ದುದನ್ನು ಕಂಡು ಹೇಳುತ್ತಾನೆ:

"ನೀನು ಮಾಡ್ತಿರೋದು ದಂಡ. ನಿನಗೆಲ್ಲಿ ಸಿಗುತ್ತೆ ಮೀನು?"

"ಯಾಕೆ ಸಿಗೊಲ್ಲ?"

"ನಾನು ಮಂತ್ರ ಹಾಕಿಬಿಡ್ತೀನಿ. ಒಂದು ಮೀನೂ ಬರೊಲ್ಲ."

"ಹಾಕು. ನಾನೇನು ಹೆದರಿಕೋತೀನಿ ಅಂದುಕೊಂಡೆಯಾ?"

ನಾನು ಒಂದಿಷ್ಟು ಹುಳುಗಳನ್ನು ಅಗೆದು ತೆಗೆದು ಅವನ್ನು ಬೂಟು ಪಾಲಿಷ್ ಡಬ್ಬಿಯಲ್ಲಿ ಹಾಕಿಕೊಂಡು ಕೊಳಕ್ಕೆ ಹೋದೆ. ಕೊಳ ನಮ್ಮ ಮನೆಯ ಹಿಂದೆಯೇ ಇತ್ತು – ಸಾಮೂಹಿಕ ಕೃಷಿಕ್ಷೇತ್ರದ ತೋಟದ ಬಳಿ. ಒಂದು ಹುಳುವನ್ನು ಗಾಳಕ್ಕೆ ಸಿಕ್ಕಿಸಿ ನೀರಿನೊಳಕ್ಕೆ ಎಸೆದು ಮೀನು ಅದನ್ನು ಕಚ್ಚುವುದಕ್ಕೇ ಕಾದು ಕುಳಿತೆ. ಘೂರಿಕ್ ಮೆಲ್ಲಗೆ ನನ್ನ ಹಿಂದೆ ಬಂದ. ಆಮೇಲೆ ಗಟ್ಟಿಯಾಗಿ ಕಿರುಚತೊಡಗಿದ:

"ಛೂ ಮಂತ್ರಂಗಾಳಿ, ಛೂ ಮಂತ್ರಂಗಾಳಿ,
ಮೀನುಗಳೇ ಇಲ್ಲಿಂದ ಮಾಯವಾಗಿ
ಹೋಗಿ!"

ನಾನು ಸುಮ್ಮನೆ ಇದ್ದೆ. ಏನೂ ಹೇಳಲಿಲ್ಲ. ಯಾಕೆಂದರೆ ಅವನು ಯಾವಾಗಲೂ



ಹಾಗೇ – ಯಾವುದನ್ನು ಮಾಡಬೇಡ ಅಂತೀವೋ ಅದನ್ನೇ ಹೆಚ್ಚಾಗಿ ಮಾಡಲು ಶುರುಮಾಡುತ್ತಾನೆ.

ಕೊನೆಗೆ ಅವನು ಮಂತ್ರ ಹಾಕೋದು ನಿಲ್ಲಿಸಿದ. ಆಮೇಲೆ ರಬ್ಬರ್ ಬೂಟನ್ನು ನೀರಿಗೆ ಎಸೆಯೋದು, ಅದನ್ನು ದಾರದಿಂದ ಎಳೆಯೋದು – ಹೀಗೆ ಮಾಡುವುದಕ್ಕೆ ಶುರುಮಾಡಿದ. ಅದೂ ಸಾಲದೂಂತ ಆಮೇಲೆ ಬೂಟನ್ನು ನೀರಿಗೆ ಎಸೆದು ಅದಕ್ಕೆ ಕಲ್ಲು ಹೊಡೆದು ಮುಳುಗಿಸಬೇಕೂಂತ ನೋಡಿದ.

ನಾನು ಮೊದಲು ಸುಮ್ಮನಿದ್ದೆ. ಆಮೇಲೆ ಕೂಗಿ ಹೇಳಿದೆ:

"ಹೋಗೋ ಆಚೆಗೆ. ನೀನು ಮೀನುಗಳನ್ನು ಹೆದರಿಸಿ ಓಡಿಸಿಬಿಡುತ್ತಿದ್ದೀಯ."

ಅವನು ಹೇಳುತ್ತಾನೆ:

"ಏನಾದರೇನು, ನಿನಗೇನೂ ಮೀನು ಸಿಗೊಲ್ಲ. ನಾನು ಮಂತ್ರ ಹಾಕಿಬಿಟ್ಟಿದ್ದೇನೆ."

ಅವನು ಮತ್ತೆ ಬೂಟನ್ನು ಕೊಳದ ಮಧ್ಯಕ್ಕೆ ಎಸೆದ! ನನಗೆ ಕೋಪ ಬಂತು. ಪಕ್ಕದಲ್ಲೇ ಇದ್ದ ಕೋಲು ಎತ್ತಿಕೊಂಡು ಅವನ ಕಡೆಗೆ ಓಡಿದೆ. ಅವನು ಓಟ ಕಿತ್ತ. ಅವನ ಹಿಂದೆ ಅವನ ಬೂಟೂ ಕುಣಿಯುತ್ತ ಕುಪ್ಪಳಿಸುತ್ತ ಹೋಗುತ್ತಿತ್ತು.





ನಾನು ಮತ್ತೆ ಕೊಳಕ್ಕೆ ಬಂದು ಮೀನು ಹಿಡಿಯೋ ಕೆಲಸದಲ್ಲಿ ತೊಡಗಿದೆ. ಸೂರ್ಯ ಆಗಲೇ ನೆತ್ತಿಯ ಮೇಲೆ ಬಂದಿದ್ದ, ಆದರೂ ಒಂದು ಮೀನೂ ಸಿಕ್ಕಿರಲಿಲ್ಲ. ಏನಾಗಿದೆ ಈ ಮೀನುಗಳಿಗೆ! ನನಗೆ ಷೂರಿಕ್‌ನ ಮೇಲೆ ಎಷ್ಟು ಕೋಪ ಬಂತು ಅಂದರೆ ಚಚ್ಚಿ ಅವನ ಮೂಳೆ ಮುರಿಯೋಣವೇ ಅನ್ನಿಸಿತು. ಅವನ ಮಂತ್ರದಲ್ಲಿ ನನಗೇನೂ ನಂಬಿಕೆ ಇರಲಿಲ್ಲ. ಆದರೂ ಬರಿಗೈಯಲ್ಲಿ ಹೋದರೆ ನಕ್ಕೇ ನಗುತ್ತಾನೆ. ಮೀನು ಹಿಡಿಯಲು ಎಲ್ಲ ರೀತಿಯಲ್ಲೂ ಪ್ರಯತ್ನಪಟ್ಟೆ – ದಾರವನ್ನು ಕೊಳದೊಳಕ್ಕೆ ದೂರ ಎಸೆದೆ, ದಡದ ಹತ್ತಿರವೇ ಹಾಕಿ ನೋಡಿದೆ, ನೀರಿನೊಳಕ್ಕೆ ಆಳಕ್ಕೆ ಹಾಕಿ ನೋಡಿದೆ. ಏನು ಮಾಡಿದರೂ ಪ್ರಯೋಜನವಿಲ್ಲ.

ನನಗೆ ತುಂಬ ಹಸಿವಾಯಿತು. ಮನೆಯ ಕಡೆ ಹೊರಟೆ. ಇದ್ದಕ್ಕಿದ್ದಂತೆ ಶಬ್ದ ಕೇಳಿಬರುತ್ತೆ – ಯಾರೋ ಗೇಟಿಗೆ ಸುತ್ತಿಗೆಯಿಂದ ಹೊಡೀತಿದಾರೆ:

ಡಬ್ – ಡಬ್! ಡಬ್ – ಡಬ್!

ಗೇಟಿನ ಹತ್ತಿರ ಹೋಗಿ ನೋಡ್ತೀನಿ – ಷೂರಿಕ್! ಎಲ್ಲಿಂದಲೋ ಸುತ್ತಿಗೆ ಮೊಳೆ ಪಡೆದುಕೊಂಡು ತನ್ನ ಬಳಿ ಇದ್ದ ಬಾಗಿಲಿನ ಹಿಡಿಯನ್ನು ಗೇಟಿಗೆ ಹೊಡೀತಾ ಇದಾನೆ.

"ಏನೋ ಇದು, ಯಾಕೆ ಹೊಡೀತಾ ಇದೀಯೋ?" ನಾನು ಕೇಳುತ್ತೇನೆ.
ನನ್ನನ್ನು ನೋಡಿ ನಗುತ್ತಾ ಹೇಳುತ್ತಾನೆ:
"ಹ - ಹ್ಹ - ಹ್ಹಾ! ಮೀನುಗಾರನು ಬಂದನೋ! ಎಲ್ಲಪ್ಪ ನಿನ್ನ ಮೀನು?"
ನಾನು ಹೇಳುತ್ತೇನೆ:
"ಈ ಹಿಡಿಯನ್ನು ಯಾಕೆ ಇಲ್ಲಿ ಹೊಡೀತಿದಿಯೋ? ಇಲ್ಲಾಗಲೇ ಒಂದು ಇದ್ದೇ ಇದೆಯಲ್ಲ."
"ಪರವಾಗಿಲ್ಲ. ಎರಡಿದ್ದರೇನಂತೆ. ಒಂದು ಹೋದರೆ ಇನ್ನೊಂದು ಇರುತ್ತೆ."

ಹಿಡಿ ಹೊಡೆದ ಮೇಲೆ ಅವನ ಬಳಿ ಇನ್ನೂ ಒಂದು ಮೊಳೆ ಉಳಿಯುತ್ತೆ. ಅದರಿಂದ ಏನು ಮಾಡಬೇಕೂಂತ ತುಂಬ ಯೋಚನೆ ಮಾಡಿದ. ಮೊದಲು ಗೇಟಿಗೇ ಹೊಡೆದು ಬಿಡೋಣ ಅಂದುಕೊಂಡ. ಆಮೇಲೆ ಇನ್ನೂ ಒಂದು ಯೋಚನೆ ಬಂತು. ರಬ್ಬರ್ ಬೂಟನ್ನು, ಅದರ ಅಟ್ಟೆ ಗೇಟಿಗೆ ಒತ್ತಿಕೊಂಡಿರೋ ಹಾಗೆ ಹಿಡಿದುಕೊಂಡು, ಅದಕ್ಕೆ ಮೊಳೆ ಹೊಡೆದ.



"ಇದು ಯಾತಕ್ಕೋ?" ನಾನು ಕೇಳುತ್ತೇನೆ.

"ಸುಮ್ಮನೆ, ಹಾಗಿರಲೀಂತ."

"ಸುಮ್ಮನೆ ಹುಚ್ಚೂಂತಾರೆ" ನಾನು ಹೇಳುತ್ತೇನೆ.

ಅಷ್ಟು ಹೊತ್ತಿಗೆ ನೋಡ್ತೀವಿ – ಅಜ್ಜ ಕೆಲಸದಿಂದ ಮನೆಗೆ ಬರ್‍ತಿದಾರೆ. ಷೂರಿಕ್‌ಗೆ ಹೆದರಿಕೆಯಾಗುತ್ತೆ. ರಬ್ಬರ್ ಬೂಟನ್ನು ಕಿತ್ತುತೆಗೆಯೋಕೆ ನೋಡ್ತಾನೆ, ಆದರೆ ಅದು ಬರೊಲ್ಲ. ಆಗ ಅವನು ಅದನ್ನು ತನ್ನ ಬೆನ್ನ ಹಿಂದೆ ಮರೆಮಾಡಿ ಅದರ ಮುಂದೆ ನಿಂತು ಕೋತಾನೆ. ಅಜ್ಜ ಹೇಳ್ತಾರೆ:

"ಭೇಷ್, ಹುಡುಗರಿರಾ! ಈಗಷ್ಟೆ ಬಂದಿದೀರಿ, ಆಗಲೇ ಕೆಲಸಕ್ಕೆ ಶುರುಮಾಡಿದಿರಾ... ಯಾರು ಗೇಟಿಗೆ ಈ ಎರಡನೇ ಹಿಡಿ ಹಾಕುವ ಯೋಚನೆ ಮಾಡಿದ್ದು?"

"ಷೂರಿಕ್" ನಾನು ಹೇಳುತ್ತೇನೆ. ಅಜ್ಜ ಸುಮ್ಮನೆ ಗಂಟಲಲ್ಲಿ ಸದ್ದುಮಾಡಿದರು.

"ಸರಿ. ಈಗ ನಮ್ಮ ಗೇಟಿಗೆ ಎರಡು ಹಿಡಿ ಇದ್ದ ಹಾಗೆ ಆಯಿತು – ಒಂದು ಮೇಲಿಂದು, ಒಂದು ಕೆಳಗಿಂದು. ಯಾರಾದರೂ ತುಂಬ ಕುಳ್ಳಾಗಿರೋರು ನಮ್ಮ ಮನೆಗೆ ಬಂದರೆ ಅವರಿಗೆ ಮೇಲಿನ ಹಿಡಿ ಹೇಗೆ ಸಿಗುತ್ತೆ? – ಅವರು ಕೆಳಗಿನ ಹಿಡಿಯನ್ನು ಉಪಯೋಗಿಸಬಹುದು."

ಆಮೇಲೆ ಅವರು ಬೂಟನ್ನು ನೋಡುತ್ತಾರೆ.

"ಇಲ್ಲಿ ಇನ್ನೂ ಒಂದು ಏನೋ ಇದೆ! ಏನಿದು?"

ನಾನು ಸುಮ್ಮನೆ ಗುಟುರು ಹಾಕಿದೆ. ಹುಂ, ಈಗ ತಿನ್ನುತ್ತಾನೆ ಷೂರಿಕ್ ಅಜ್ಜನ ಕೈಲಿ ಹೊಡೆತ! ಷೂರಿಕ್‌ನ ಮುಖ ಕೆಂಪಾಯಿತು. ಏನು ಹೇಳಬೇಕು ಅನ್ನೋದು ಅವನಿಗೇ ತಿಳಿಯದು. ಅಜ್ಜ ಹೇಳ್ತಾರೆ:

"ಇದು ಏನಿರಬಹುದು? ಇದು, ಬಹುಶಃ, ಟಪ್ಪಾಲು ಪೆಟ್ಟಿಗೆ ಇರಬಹುದು. ಅಂಚೆಯವನು ಬರುತ್ತಾನೆ, ನೋಡುತ್ತಾನೆ, ಮನೆಯಲ್ಲಿ ಯಾರೂ ಇಲ್ಲ, ಟಪ್ಪಾಲನ್ನು ಈ ಬೂಟಿನಲ್ಲಿ ಹಾಕಿ ಮುಂದೆ ಹೋಗುತ್ತಾನೆ. ತುಂಬ ಬುದ್ಧಿವಂತಿಕೆಯ ವಿಚಾರ."

"ನಾನೇ ಹೀಗಂದುಕೊಂಡು ಮಾಡಿದ್ದು!" ಷೂರಿಕ್ ಹೇಳ್ತಾನೆ.

"ಹೌದೇ, ನೀನೇ?"

"ಹೌದು, ನಿಜವಾಗಲೂ!"

"ಭಲೆ, ಭೇಷ್!" ಅಜ್ಜ ಕೈ ಆಡಿಸುತ್ತ ಹೇಳುತ್ತಾರೆ.

ಊಟಕ್ಕೆ ಕುಳಿತಾಗ ಅಜ್ಜ ಉತ್ಸಾಹದಿಂದ ಕೈ ಆಡಿಸುತ್ತ ಎಲ್ಲವನ್ನೂ ಅಜ್ಜಿಗೆ ಹೇಳಿದರು. ಆ ರಬ್ಬರ್ ಬೂಟಿನ ವಿಷಯವನ್ನೂ ಹೇಳಿದರು:

"ನಮ್ಮ ಹುಡುಗರು ಎಷ್ಟು ಬುದ್ಧಿವಂತರು ಅಂತೀಯಾ! ನನಗೇ ಈ ವಿಷಯ ಇದುವರೆವಿಗೂ ಹೊಳೆದೇ ಇರಲಿಲ್ಲ! ನಿನಗೆ ಗೊತ್ತೆ, ಇವನು ಗೇಟಿಗೆ ಒಂದು ರಬ್ಬರು ಬೂಟು ಹೊಡಿದಿದಾನೆ! ನಮಗೆ ಒಂದು ಟಪ್ಪಾಲು ಪೆಟ್ಟಿಗೆ ಬೇಕೂಂತ ನಾನು ಎಷ್ಟು ದಿವಸದಿಂದ ಅಂದುಕೊಳ್ಳುತ್ತ ಇದ್ದೆ. ಆದರೆ ಹೇಗೆ ಮಾಡಬೇಕೂಂತಾನೇ ತಿಳಿದಿರಲಿಲ್ಲ."

"ಸರಿ, ಸರಿ" ಅಜ್ಜಿ ನಗುತ್ತ ಹೇಳಿದಳು. "ನನಗೆ ಗೊತ್ತಾಯಿತು ನಿಮ್ಮ ಇಂಗಿತ. ಟಪ್ಪಾಲು ಪೆಟ್ಟಿಗೆ ತರುತ್ತೇನೆ. ಅದುವರೆವಿಗೂ ಈ ಬೂಟೂ ಇರಲಿ."

ಊಟವಾದ ಮೇಲೆ ಷೂರಿಕ್ ತೋಟಕ್ಕೆ ಓಡಿದ. ಅಜ್ಜ ನನಗೆ ಹೇಳುತ್ತಾರೆ:

"ಷೂರಿಕ್‌ನಂತೂ ಬೆಳಿಗ್ಗೆಯೆಲ್ಲ ಏನೇನೋ ಕೆಲಸ ಮಾಡಿದಾನೆ, ನೀನೂ ಏನಾದರೂ ಮಾಡಿರಬೇಕು, ಅಲ್ಲವೇ, ಕೋಲ್ಯ? ಹೇಳು ಏನು ಮಾಡಿದೇಂತ, ನಿನ್ನ ಅಜ್ಜನಿಗೆ ಸಂತೋಷವಾಗಲಿ."



"ನಾನು ಮೀನು ಹಿಡಿಯೋಕೆ ಹೋದೆ. ಆದರೆ ಒಂದು ಮೀನೂ ಸಿಕ್ಕಲೇ ಇಲ್ಲ."

"ಎಲ್ಲಿ ಮೀನು ಹಿಡಿಯೋಕೆ ಹೋದೆ?"

"ಕೊಳದಲ್ಲಿ."

"ಅಯ್ಯಯ್ಯೋ" ಅಜ್ಜ ಹೇಳಿದರು. "ಅಲ್ಲಿ ಮೀನು ಹೇಗೆ ಇರುತ್ತೆ? ಈ ಕೊಳವನ್ನು ಈಚೆಗಷ್ಟೆ ಅಗೆದು ಮಾಡಿದ್ದಾರೆ. ಅಲ್ಲಿ ಇನ್ನೂ ಕಪ್ಪೆಗಳೂ ಇದ್ದ ಹಾಗಿಲ್ಲ. ನೀನು ಮೀನು ಹಿಡೀಬೇಕು ಅನ್ನೋದಾದರೆ ನದಿಗೆ ಹೋಗಬೇಕು. ಅಲ್ಲಿ ಮರದ ಸೇತುವೆಯ ಕೆಳಗೆ ನೀರು ಜೋರಾಗಿ ಹರೀತಿರುತ್ತೆ. ಅಲ್ಲಿ ನೀನು ಮೀನು ಹಿಡೀಬೇಕು."

ಅಜ್ಜ ಮತ್ತೆ ಕೆಲಸಕ್ಕೆ ಹೋದರು. ನಾನು ಮೀನು ಹಿಡಿಯೋ ಕೋಲು ತಗೊಂಡು ಷೂರಿಕ್‌ನ ಹತ್ತಿರ ಹೋಗಿ ಹೇಳುತ್ತೇನೆ:

"ನದಿಗೆ ಹೋಗಿ ಮೀನು ಹಿಡಿಯೋಣ, ಬಾರೋ."

"ಆಹ್ಹಾ ಹೆದರಿಬಿಟ್ಟೆಯಾ! ಈಗ ನನ್ನ ಜೊತೆ ಸ್ನೇಹ ಮಾಡಿಕೊಳ್ಳೋಕೆ ಬಂದಿದೀಯಾ!"

"ಯಾತಕ್ಕೆ ನಿನ್ನ ಜೊತೆ ಸ್ನೇಹ ಮಾಡಿಕೊಳ್ಳಬೇಕು?"



"ಯಾಕೇಂದರೆ, ನಾನು ಮೀನುಗಳಿಗೆ ಮಂತ್ರ ಹಾಕದೆ ಇರಲಿ, ಅಂತ."

"ಮಂತ್ರ ಹಾಕ್ತೀಯಾ? ಹಾಕಿಕೋ" ನಾನು ಹೇಳುತ್ತೇನೆ.

ನಾನು ಹುಳುಗಳ ಡಬ್ಬಿ, ಮೀನಿಗೋಸ್ಕರ ಖಾಲಿ ಗಾಜಿನ ಜಾಡಿ ತಗೊಂಡು ಮೀನು ಹಿಡಿಯೋಕೆ ಹೋದೆ. ಷೂರಿಕ್‌ನೂ ನನ್ನ ಹಿಂದೆಯೇ ಬಂದ. ನದಿಗೆ ಹೋದೆವು. ನಾನು ಸೇತುವೆಯ ಸಮೀಪದಲ್ಲೇ ನೀರು ಜೋರಾಗಿ ಹರೀತಿರೋ ಕಡೆ ದಡದ ಮೇಲೆ ಕುಳಿತು ಗಾಳವನ್ನು ನೀರಿನೊಳಕ್ಕೆ ಎಸೆದೆ. ಷೂರಿಕ್ ನನ್ನ ಹಿಂದೆಯೇ ಇದ್ದುಕೊಂಡು ಮೆಲ್ಲಗೆ ಗೊಣಗುತ್ತಲೇ ಇದ್ದ:

"ಛೂ ಮಂತ್ರಂಗಾಳಿ, ಛೂ ಮಂತ್ರಂಗಾಳಿ, ಮೀನುಗಳೇ ಇಲ್ಲಿಂದ ಮಾಯವಾಗಿ ಹೋಗಿ!"

ಸ್ವಲ್ಪ ಹೊತ್ತು ಸುಮ್ಮನೆ ಇರ್‍ತಾನೆ, ಮತ್ತೆ ಶುರು ಮಾಡ್ತಾನೆ:

"ಛೂ ಮಂತ್ರಂಗಾಳಿ, ಛೂ ಮಂತ್ರಂಗಾಳಿ...."

ಇದ್ದಕ್ಕಿದ್ದಂತೆ ಒಂದು ಮೀನು ಗಾಳದ ಹುಳುವನ್ನು ಕಚ್ಚುತ್ತೆ. ನಾನು ತಕ್ಷಣವೇ ದಾರವನ್ನು ಜಗ್ಗಿ ಎಳೆಯುತ್ತೇನೆ. ಮೀನು ಗಾಳಿಯಲ್ಲಿ ಥಳಥಳನೆ ಹೊಳೆಯುತ್ತೆ. ಗಾಳದ ಕೊಂಡಿಯಿಂದ ಕಳಚಿಕೊಂಡು ನೀರಿಗೆ ಸಮೀಪದಲ್ಲೇ ದಡದ ಮೇಲೆ ಬಿದ್ದು ಹೊರಳಾಡುತ್ತೆ.



ಆಗ ಷೂರಿಕ್, “ಹಿಡಿ, ಹಿಡಿ ಅದನ್ನು !” ಅಂತ ಕಿರುಚುತ್ತಾನೆ. ತಾನೇ ಅದರ ಮೇಲೆ ಬೀಳುತ್ತಾನೆ. ಅದು ನುಣುಚಿಕೊಂಡು ನೀರಿಗೆ ಇನ್ನೂ ಸಮೀಪ ಹೊರಳಾಡುತ್ತ ಹೋಗುತ್ತೆ. ಅಂತೂ ಷೂರಿಕ್ ಕೊನೆಗೆ ಅದನ್ನು ಹಿಡಿದ. ನಾನು ಜಾಡಿಯಲ್ಲಿ ನೀರು ತಂದೆ. ಷೂರಿಕ್ ಮೀನನ್ನು ಅದರಲ್ಲಿ ಹಾಕಿ ಅದನ್ನೇ ಪರೀಕ್ಷಿಸುವವನಂತೆ ನೋಡುತ್ತ ಕುಳಿತ.

“ಇದು ಪೆರ್ಚ್ ಮೀನು ಕಣೋ !” ಅವನು ಹೇಳುತ್ತಾನೆ. “ಖಂಡಿತ, ಪೆರ್ಚ್ ಮೀನು ! ನೋಡು ಇದರ ಮೇಲೆ ಗೆರೆಗಳು ಹೇಗಿವೆ. ಇದು ನನಗಾ ?”

“ಆಗಲಿ, ಇದು ನಿನಗೇ. ನಾವು ಇನ್ನೂ ತುಂಬ ಹಿಡಿಯೋಣ.”

ನಾವು ತುಂಬ ಹೊತ್ತು ಮೀನು ಹಿಡಿಯುತ್ತಾ ಇದ್ದೆವು. ಆರು ಪುಟ್ಟ ಪೆರ್ಚ್ ಮೀನುಗಳು, ನಾಲ್ಕು ಗಡ್ಜನ್ ಹಾಗೂ ಒಂದು ರಫ್ ಮೀನು ಹಿಡಿದೆವು.

ಹಿಂದಿರುಗುತ್ತ ಷೂರಿಕ್‌ನೇ ಮೀನಿನ ಜಾಡಿಯನ್ನು ಹಿಡಿದು ತಂದ. ನನಗೆ ಹಿಡಿದುಕೊಳ್ಳುವುದಕ್ಕೆ ಬಿಡಲೇ ಇಲ್ಲ. ಅವನಿಗೆ ತುಂಬ ಸಂತೋಷವಾಗಿತ್ತು. ಗೇಟಿನ ಮೇಲೆ ಹೊಡೆ



ದಿದ್ದ ರಬ್ಬರು ಬೂಟು ಹೋಗಿ ಅದರ ಸ್ಥಳದಲ್ಲಿ ಒಂದು ಹೊಳೆಯುತ್ತಿದ್ದ ಬಣ್ಣದ ಟಪ್ಪಾಲು ಪೆಟ್ಟಿಗೆ ಇದ್ದುದನ್ನು ಕಂಡಾಗಲೂ ಅವನಿಗೇನೂ ಬೇಸರವಾಗಲಿಲ್ಲ.

"ಪರವಾಗಿಲ್ಲ" ಅವನೆಂದ. "ನನ್ನ ಕೇಳಿದರೆ, ಟಪ್ಪಾಲು ಪೆಟ್ಟಿಗೆ ಬೂಟಿಗಿಂತ ಎಷ್ಟೋ ವಾಸಿ."

ಅವನು ಕೈ ಕೊಡಹಿ, ಮೀನು ತೋರಿಸಲು ಅಜ್ಜಿಯ ಬಳಿಗೆ ಓಡಿ ಹೋದ. ಅಜ್ಜಿಗೆ ನಮ್ಮ ವಿಷಯದಲ್ಲಿ ತುಂಬ ಸಂತೋಷವಾಯಿತು. ಆಮೇಲೆ ನಾನು ಷೂರಿಕ್‌ಗೆ ಹೇಳಿದೆ:

"ನೋಡಿದಿಯಾ, ನಿನ್ನ ಮಂತ್ರ ಏನೂ ಕೆಲಸ ಮಾಡಲಿಲ್ಲ. ನಿನ್ನ ಮಂತ್ರಕ್ಕೆ ಏನೂ ಬೆಲೆ ಇಲ್ಲ ಅಂತಾಯಿತು. ನಾನಂತೂ ಈ ಮಂತ್ರಗಳನ್ನು ನಂಬೊಲ್ಲ."

"ಹುಂ !" ಅಂದ ಷೂರಿಕ್. "ನಾನು ನಂಬುತ್ತೀನಿ ಅಂತ ತಿಳಕೊಂಡ್ಯಾ ? ನಿಜವಾಗಲೂ ಮೂರ್ಖರಾಗಿರೋರು ಇಲ್ಲವೇ ತುಂಬ ವಯಸ್ಸಾದವರಷ್ಟೆ ನಂಬುತ್ತಾರೆ."

ಈ ಮಾತನ್ನು ಕೇಳಿ ಅಜ್ಜಿ ಗಟ್ಟಿಯಾಗಿ ನಕ್ಕಳು. ಯಾಕೆಂದರೆ ಅವಳಿಗೆ ತುಂಬ ವಯಸ್ಸಾಗಿತ್ತು, ಆದರೆ ಅವಳೂ ಮಂತ್ರ ಮಾಯಗಳನ್ನು ನಂಬುತ್ತಿರಲಿಲ್ಲ.



